**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 405

ಸದಸ್ಯರ ಹೆಸರು : ಶ್ರೀ ಸುನೀಲ್ ವಲ್ಯಾಪುರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 18-02-2022.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯಲ್ಲಿ ಎಷ್ಟು ಗ್ರಾಮ ಪಂಚಾಯತಿಗಳನ್ನು ಹೊಸದಾಗಿ ರಚಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಕಲಬುರಗಿ ಜಿಲ್ಲೆಯ ಕಲಬುರಗಿ ತಾಲ್ಲೂಕಿನಲ್ಲಿ 5, ಆಳಂದ ತಾಲ್ಲೂಕಿನಲ್ಲಿ 8, ಚಿಂಚೋಳಿ ತಾಲ್ಲೂಕಿನಲ್ಲಿ 4, ಸೇಡಂ ತಾಲ್ಲೂಕಿನಲ್ಲಿ 4, ಶಹಾಬಾದ ತಾಲ್ಲೂಕಿನಲ್ಲಿ 1, ಚಿತ್ತಾಪೂರ ತಾಲ್ಲೂಕಿನಲ್ಲಿ 4, ಕಾಳಗಿ ತಾಲ್ಲೂಕಿನಲ್ಲಿ 2, ಯಡ್ರಾಮಿ ತಾಲ್ಲೂಕಿನಲ್ಲಿ 4, ಅಫಜಲಪೂರ ತಾಲ್ಲೂಕಿನಲ್ಲಿ 6, ಜೇವರ್ಗಿ ತಾಲ್ಲೂಕಿನಲ್ಲಿ 5, ಕಮಲಾಪುರ ತಾಲ್ಲೂಕಿನಲ್ಲಿ 1 ಗ್ರಾಮ ಪಂಚಾಯತಿ ಸೇರಿದಂತೆ ಒಟ್ಟು 42 ಹೊಸ ಗ್ರಾಮ ಪಂಚಾಯತಿಗಳನ್ನು ರಚಿಸಲಾಗಿದೆ. |
| ಆ) | ಸರ್ಕಾರವು ಗ್ರಾಮ ಪಂಚಾಯಿತಿಗಳನ್ನು ಯಾವ ಮಾನದಂಡಗಳ ಆಧಾರದ ಮೇಲೆ ಪಟ್ಟಣ ಮತ್ತು ಪುರಸಭೆಗಳಾಗಿ ಪರಿವರ್ತಿಸಿದೆ; | ನಗರ ಸ್ಥಳೀಯ ಸಂಸ್ಥೆಗಳನ್ನು ಮೇಲ್ದರ್ಜೆಗೇರಿಸಲು ಕರ್ನಾಟಕ ಪುರಸಭೆಗಳ ಅಧಿನಿಯಮ, 1964 ರ ಪ್ರಕರಣ 3, 4, 9, 349 & 355 ರಲ್ಲಿ ತಿಳಿಸಿರುವ ಮಾನದಂಡಗಳನ್ನು ಅನುಸರಿಸಲಾಗುತ್ತದೆ:<br><br>**ಗ್ರಾಮ ಪಂಚಾಯಿತಿಯಿಂದ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು:**<br>1) ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ ಹೊರತು;<br>2) ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;<br>3) ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;<br>• ದಿನಾಂಕ:19/03/2015 ರ ಸಚಿವ ಸಂಪುಟ ನಿರ್ಣಯದಂತೆ 15,000 ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿರುವ ಗ್ರಾಮ ಪಂಚಾಯಿತಿಗಳನ್ನು ಮಾತ್ರ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗಿದೆ.<br><br>**ಗ್ರಾಮ/ಪಟ್ಟಣ ಪಂಚಾಯಿತಿಯಿಂದ ಪುರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು:**<br>1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಐವತ್ತು ಸಾವಿರಕ್ಕಿಂತ ಹೆಚ್ಚಿಲ್ಲದ ಹೊರತು;<br>2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;<br>3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;<br>4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು; |
| ಇ) | ಕಲಬುರಗಿ ಜಿಲ್ಲೆಯಲ್ಲಿ ಪಂಚಾಯತಿಗಳ ಗಡಿ ಗುರುತಿಸಲಾಗಿದೆಯೇ; ಹಾಗಿದ್ದಲ್ಲಿ, ಇದರಿಂದ ಜನರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದಲ್ಲಿ, ಜನರಿಗೆ ತೊಂದರೆಯಾಗುತ್ತಿರುವುದನ್ನು ತಡೆಯಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರಲ್ಲಿ ಪಂಚಾಯತಿಗಳ ಗಡಿ ಗುರುತಿಸಲು ಉಪಬಂಧ ಕಲ್ಪಿಸಿರುವುದಿಲ್ಲ. |

ಸಂ. ಗ್ರಾಅಪ 29 ಗ್ರಾಪಂಅ 2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**